ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಸಂಪುಟ: ೦೨ ಸಂಚಿಕೆ: ೦೨ ಮೇ ೨೦೧೫ ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್



**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/–**

**ಐದು ವರ್ಷಗಳ ಚಂದಾ**
**ರೂ. ೧೦೦/–**

ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೮
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೫ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೫
ಇಮೇಲ್ : bmsritrust@gmail.com

## ಡಾ.ವಿಜಯಾ ಸುಬ್ಬರಾಜ್ ದತ್ತಿ
## ಶ್ರೀಮತಿ ಸುನಂದಾ ಪ್ರಕಾಶ ಕಡಮೆಯವರಿಗೆ “ಗಣ್ಯ ಲೇಖಕಿ” ಪ್ರಶಸ್ತಿ

ದಿನಾಂಕ 26ನೇ ಏಪ್ರಿಲ್ 2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಂಯೋಜನಾ ಅಧಿಕಾರಿಯಾಗಿರುವ ಹಿರಿಯ ಲೇಖಕಿ ಡಾ. ವಿಜಯಾ ಸುಬ್ಬರಾಜ್ ರವರು ಸ್ಥಾಪಿಸಿರುವ ಗಣ್ಯ ಲೇಖಕಿ ಪ್ರಥಮ ಪುರಸ್ಕಾರವನ್ನು ಚೆನ್ನೈ ದೂರದರ್ಶನ ಕೇಂದ್ರದ ನಿರ್ದೇಶಕರಾದ ಶ್ರಿ ಸಿ ಎನ್ ರಾಮಚಂದ್ರರವರು ಶ್ರೀಮತಿ ಸುನಂದಾ ಪ್ರಕಾಶ ಕಡಮೆಯವರಿಗೆ ಪ್ರದಾನ ಮಾಡಿದರು. ಗಣ್ಯ ಲೇಖಕಿ ಪುರಸ್ಕಾರವು ರೂ. ಹತ್ತು ಸಾವಿರ ನಗದು, ಪ್ರಶಸ್ತಿ ಪತ್ರ ಹಾಗೂ ಫಲಕಗಳನ್ನು ಒಳಗೊಂಡಿರುತ್ತದೆ.



ಹಳೆಯ ಕಟ್ಟಳೆಗಳಿಗೆ ಜೋತು ಬೀಳದೆ ಹೊಸದಾರಿಯ ಮೂಲಕ ಹಳತು ಹೊಸತುಗಳೆರಡನ್ನೂ ಸಮ್ಮಿಳಿತಗೊಳಿಸುವ ಜಾಣತನವನ್ನು ಶ್ರೀಮತಿ ಸುನಂದ ಅವರು ಸಾಧಿಸಿದ್ದಾರೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು. ಹಾಗೆಯೇ ಸಾಮಾನ್ಯವಾಗಿ ಮಹಿಳೆಯರ ಸಾಹಿತ್ಯದಲ್ಲಿ ಕಂಡುಬರುವ ಆಸೂಯೆ, ಮತ್ಸರ ಕೋಪತಾಪಗಳು ಕೌಟುಂಬಿಕ ವೈಮನಸ್ಯಗಳ ಕಡೆಗೆ ಹೆಚ್ಚು ವಾಲದೇ ಎಲ್ಲರೂ ಓದಿ ಮೆಚ್ಚಬಹುದಾದ ಶೈಲಿ ಅವರದು ಎಂದು ಹೊಗಳಿದರು.ಈ ಪ್ರಶಸ್ತಿಯನ್ನು ಪಡೆದ ನಂತರ ಶ್ರೀಮತಿ ಸುನಂದಾ ಅವರ ಮೇಲೆ ಇನ್ನೂ ಹೆಚ್ಚಿನ ಜವಾಬ್ದಾರಿ ಬಿದ್ದಂತಾಗಿದೆ ಎಂದು ಸೂಚಿಸಿದರು.

**3ನೇ ಪುಟಕ್ಕೆ**

# ಸಂಪಾದಕೀಯ

**ಹೊಂಗನಸು**

ಪ್ರಕೃತಿಯ ವಿಕೋಪಕ್ಕೆ ಒಳಗಾಗಿರುವ ನೇಪಾಳದ ಜನತೆಗೆ ನಮ್ಮೆಲ್ಲರ ಅನುಕಂಪವಿದೆ.ಅಲ್ಲಿನ ಜನಸಾಮಾನ್ಯರು ಪಡುತ್ತಿರುವ ಕಷ್ಟನಷ್ಟಗಳು ನಮ್ಮೆಲ್ಲರ ಮನ ಕಲಕುವಂತಾಗಿರುತ್ತದೆ. ಬಂಧು ಬಳಗದವರನ್ನು ಕಳೆದುಕೊಂಡಿರುವ ಹಾಗೂ ತಮ್ಮ ಸೂರಿನಡಿಯಲ್ಲಿ ನೆಮ್ಮದಿಯಿಂದ ಬದುಕು ಸಾಗಿಸುತ್ತಿರುವವರಿಗೆ ಇದ್ದಕ್ಕಿದ್ದ ಹಾಗೆ ಆಸ್ತಿ ಪಾಸ್ತಿಗಳನ್ನು ಕಳೆದುಕೊಂಡು ರಸ್ತೆಯಲ್ಲಿ ಚಳಿ, ಮಳೆ ಗಾಳಿಗಳಿಗೆ ಮೈಯೊಡ್ಡಿಕೊಂಡು ಜೀವನ ಮಾಡುವ ದುಸ್ಥಿತಿ ಒದಗಿ ಬಂದಿರುವುದು ನಿಜಕ್ಕೂ ಶೋಚನೀಯ. ನಮ್ಮ ಸೀಮಿತ ಸಾಮರ್ಥ್ಯ ಹಾಗೂ ಅನುಭವಗಳ ಕಾರಣದಿಂದ ಯಾವರೀತಿಯಾಗಿ ನಾವು ಅವರಿಗೆ ಸಾಂತ್ವನ ತಿಳಿಸಬಹುದು ಎಂಬುದೇ ತಿಳಿಯದು.ಸಂತ್ರಸ್ತರ ಕಷ್ಟಗಳು ಆದಷ್ಟೂ ಶೀಘ್ರವಾಗಿ ಕೊನೆಗಾಣಲಿ ಎಂದು ನಾವೆಲ್ಲರೂ ಆಶಿಸೋಣ.

ಸರ್ಕಾರದ ಮಟ್ಟದಲ್ಲಿ ತೆಗೆದುಕೊಂಡಿರುವ ಕ್ರಮದಿಂದ ನಮ್ಮ ಪ್ರತಿಷ್ಠಾನಕ್ಕೆ ನೀಡಲಾಗುತ್ತಿದ್ದ ಅನುದಾನದಲ್ಲಿ ಅರ್ಧದಷ್ಟು ಕಡಿತಗೊಳಿಸಲಾಗಿದೆ. ಹಿರಿಯರು ಹೇಳುವಂತೆ ಒಂದು ಬಾಗಿಲು ಮುಚ್ಚಿಕೊಂಡರೆ ಇನ್ನೊಂದು ಬಾಗಿಲು ತೆರೆದುಕೊಳ್ಳುತ್ತದೆ ಎನ್ನುವ ಹಾಗೆ ಪ್ರತಿಷ್ಠಾನಕ್ಕೆ ಪುಸ್ತಕಗಳನ್ನು ದಾನ ಮಾಡಲು ಭೇಟಿ ನೀಡಿದ ಸನ್ಮಾನ್ಯ ಶ್ರೀಮತಿ ಸುಧಾ ಮೂರ್ತಿಯವರು ಪ್ರತಿಷ್ಠಾನದ ಅಗತ್ಯಗಳನ್ನು ಮನಗಂಡು ಪ್ರತಿಷ್ಠಾನದ ಶಾಶ್ವತ ನಿಧಿಗೆ ರೂ. ಹತ್ತು ಲಕ್ಷಗಳಷ್ಟು ಹಣವನ್ನು ದಾನ ಮಾಡಿರುತ್ತಾರೆ. ಅವರ ಉದಾರತೆಗೆ ನಮ್ಮೆಲ್ಲರ ಧನ್ಯವಾದಗಳು.

ಪ್ರತಿಷ್ಠಾನದ ಚಟುವಟಿಕೆಗಳ ಬಗ್ಗೆ ಹಾಗೂ ಹೊಂಗನಸು ವಾರ್ತಾಪತ್ರದ ಬಗ್ಗೆ ನಿಮ್ಮ ಅನಿಸಿಕೆಗಳನ್ನು ಒಂದು ಪುಟಕ್ಕೆ ಮೀರದಂತೆ ಬರೆದು ನಮಗೆ ಕಳುಹಿಸಿಕೊಡಿ.ಆಯ್ದ ಪತ್ರಗಳನ್ನು ಈ ವಾರ್ತಾಪತ್ರದಲ್ಲಿ ಪ್ರಕಟಿಸಲಾಗುವುದು.

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/– ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ.ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

**ಬಿ. ಆರ್. ರವೀಂದ್ರನಾಥ್**
ಸಂಪಾದಕರು

**ಮೇ 2015ರಲ್ಲಿ ಆಯೋಜಿಸಲಾದ ಕಾರ್ಯಕ್ರಮಗಳು**

**16ಮೇ 2015 –ಶನಿವಾರ ಸಂಜೆ 5.30**

ಸೂವೆಂ ಅರಗ ವಿಮರ್ಶಾ ಪ್ರಶಸ್ತಿ ಪ್ರದಾನ
ಪ್ರಶಸ್ತಿ ಪ್ರದಾನ ಮತ್ತು ಅಧ್ಯಕ್ಷತೆ :
ಡಾ. ಹೆಚ್ ಎಸ್ ವೆಂಕಟೇಶ ಮೂರ್ತಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ವಾರ್ಷಿಕವಾಗಿ ನೀಡುವ ಸೂವೆಂ ಅರಗ ವಿಮರ್ಶಾ ಪ್ರಶಸ್ತಿಗಾಗಿ ಕೃತಿಗಳನ್ನು ಆಹ್ವಾನಿಸಿದ್ದು ಹತ್ತು ಸಾವಿರ ರೂಪಾಯಿ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ 2014 ನೆಯ ಸಾಲಿನ ಮೊದಲ ಆವೃತ್ತಿಯಾಗಿ ಪ್ರಕಟವಾಗಿರುವ ಕನ್ನಡದ ಶ್ರೇಷ್ಠ ವಿಮರ್ಶಾ ಕೃತಿಯೊಂದಕ್ಕೆ ನೀಡಲಾಗುವ ಈ ಪ್ರಶಸ್ತಿಗಾಗಿ 26ಕ್ಕೂ ಹೆಚ್ಚು ಕೃತಿಗಳು ಬಂದಿದ್ದು ಅವುಗಳ ಮೌಲ್ಯಮಾಪನದ ಹೊಣೆಗಾರಿಕೆಯನ್ನು ಶ್ರೇಷ್ಠ ವಿದ್ವಾಂಸರಿಗೆ ವಹಿಸಲಾಗಿದೆ.

# ಹಸ್ತಪ್ರತಿ ವಿಭಾಗ

ಹಸ್ತಪ್ರತಿ ವಿಭಾಗವು ಪ್ರತಿಷ್ಠಾನದಲ್ಲಿ ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ಫೆಬ್ರವರಿ ಹಾಗೂ ಮಾರ್ಚ್ ತಿಂಗಳುಗಳಲ್ಲಿ 21 ಗ್ರಂಥಗಳ ಶುಷ್ಕ ಶುದ್ದೀಕರಣ, 55 ಗ್ರಂಥಗಳಿಗೆ ತೈಲ ಲೇಪನ, 16 ಗ್ರಂಥಗಳಿಗೆ ಮಸಿ ಲೇಪನ, 64 ಗ್ರಂಥಗಳಲ್ಲಿ ಪತ್ರಗಳ ಜೋಡಣೆ ಮತ್ತು ಸ್ಕಾನ್ ಮಾಡಲು ಸಿದ್ಧಪಡಿಸಿರುವುದು, 85 ಗ್ರಂಥಗಳನ್ನು ಸ್ಕಾನ್ ಮಾಡಿರುವುದು, 114 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು, 23 ಗ್ರಂಥಗಳಿಗೆ ಅಟ್ಟೆ ಕಟ್ಟಿರುವುದು ಮತ್ತು 3 ಗ್ರಂಥಗಳಿಗೆ ಬಟ್ಟೆ ಕಟ್ಟಿರುವುದು ಈ ಎಲ್ಲಾ ಕೆಲಸಗಳನ್ನು ಮಾಡಿರಲಾಗಿರುತ್ತದೆ. ಇಬ್ಬರು ಮೂವರು ಸಿಬ್ಬಂದಿಗಳು ಹಾಗೂ ಕೆಲ ಸ್ವಯಂಪ್ರೇರಿತರ ಶ್ರಮದಿಂದ ಈ ಚಟುವಟಿಕೆಗಳನ್ನು ಸಾಧಿಸಲಾಗಿದೆ.ಮಾನ್ಯ ಸದಸ್ಯರಿಗೆ ತಿಳಿದಿರಬಹುದಾದಂತೆ ಹಸ್ತಪ್ರತಿಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಅತ್ಯುತ್ತಮ ರೀತಿಯಲ್ಲಿ ನಡೆಸುತ್ತಿರುವ ಸಂಸ್ಥೆಗಳ ಪೈಕಿ ನಮ್ಮ ಪ್ರತಿಷ್ಠಾನ ಒಂದು ಪ್ರಮುಖ ಸಂಸ್ಥೆಯಾಗಿರುತ್ತದೆ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಏಪ್ರಿಲ್ 2015 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು

## ಕೆಪಿ ರಾವ್ ದತ್ತಿ ಉಪನ್ಯಾಸ

ದಿನಾಂಕ 16ನೇ ಏಪ್ರಿಲ್ 2015ರಂದು ಕೆಪಿ ರಾವ್ ದತ್ತಿಉಪನ್ಯಾಸವನ್ನು ಶ್ರೀ ಶೈಲೇಶ ಚಂದ್ರಗುಪ್ತಾ ರವರು "ಮಾಧ್ಯಮ ಕ್ಷೇತ್ರದ ವಿಕಲ್ಪಗಳು'ಎಂಬ ವಿಷಯದ ಬಗ್ಗೆ ನೀಡಿದರು.ತಮ್ಮ ಪತ್ರಕರ್ತ ಜೀವನದ ಅನುಭವಗಳು ಹಾಗೂ ಸುದ್ದಿ ಮಾಧ್ಯಮ ಹಾಗೂ ದೃಶ್ಯ ಮಾಧ್ಯಮಗಳಲ್ಲಿ ಕಳೆದ 25 ವರ್ಷಗಳಲ್ಲಿ ಸುದ್ದಿ ಮಾಧ್ಯಮ ಕ್ಷೇತ್ರದಲ್ಲಿ ಆಗಿರುವ ಬೆಳವಣಿಗೆಗಳು ಹಾಗೂ ಅದರ ಜೊತೆಗೆ ಬಂದಿರುವ ಆತಂಕಕಾರಿ ಬದಲಾವಣೆಗಳ ಬಗ್ಗೆ ಆಳವಾದ ವಿಶ್ಲೇಷಣೆ ಹಾಗೂ ಆತಂಕಗಳನ್ನು ಮಂಡಿಸಿ ಅನೇಕ ಉದಾಹರಣೆಗಳನ್ನು ನೀಡಿ ಸವಿಸ್ತಾರವಾಗಿ ವಿವರಿಸಿದರು. ಶ್ರೀ ಕೆಪಿ ರಾವ್ ರವರ ಮಗಳು ಕೆಪಿ ರಾವ್ ದತ್ತಿ ನಿಧಿ ಸ್ಥಾಪಕಿ ಶ್ರೀಮತಿ ಪ್ರಭಾ ಮೂರ್ತಿಯವರು ತಮ್ಮ ತಂದೆಯವರು



ವಕೀಲರಾಗಿದ್ದರು.ಅವರಿಗೆ ಮಾಧ್ಯಮ ಕ್ಷೇತ್ರದಲ್ಲಿ ವಿಶೇಷ ಆಸಕ್ತಿ ಹೊಂದಿದ್ದರು ಎಂದು ದತ್ತಿ ನಿಧಿಯ ಸ್ಥಾಪನೆಯ ಹಿನ್ನಲೆಯನ್ನು ವಿವರಿಸಿದರು.ಅಧ್ಯಕ್ಷತೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣವಹಿಸಿದ್ದರು.

ಒಂದನೇ ಪುಟದಿಂದ







ಪ್ರಶಸ್ತಿಯನ್ನು ಸ್ವೀಕರಿಸಿದ ಶ್ರೀಮತಿ ಸುನಂದ ದತ್ತಿ ಸ್ಥಾಪಕಿ ಡಾ. ವಿಜಯಾ ಸುಬ್ಬರಾಜ್, ಶ್ರೀ, ರಾಮಚಂದ್ರ ಹಾಗೂ ಪ್ರತಿಷ್ಠಾನದವರಿಗೆ ಧನ್ಯವಾದಗಳನ್ನು ತಿಳಿಸಿ ಅವರು ಪ್ರಶಸ್ತಿಗಳು ಆಭರಣಗಳಿದ್ದಂತೆ. ಇಂತಹ ಆಭರಣಗಳನ್ನು ಸ್ನೇಹಿತರು ಹಾಗೂ ಅಭಿಮಾನಿಗಳು ತೊಡಿಸಿ ಪ್ರೋತ್ಸಾಹಿಸುತ್ತಾರೆ.ಇದನ್ನು ಪಡೆದ ನಂತರ ತನ್ಮಯತೆಯಿಂದ ಬರವಣಿಗೆಯನ್ನು ಮುಂದುವರೆಸಲು ಇವುಗಳನ್ನು ಕಳಚಿ ಸದ್ಯಕ್ಕೆ ಮರೆಯಬೇಕಾಗುತ್ತದೆ ಎಂದು ಹೇಳಿದರು.

ಕಾರ್ಯಕ್ರಮದ ಮೊದಲಿಗೆ ಪ್ರಾಸ್ತಾವಿಕ ನುಡಿಗಳನ್ನು ಆಡಿದ ಪ್ರತಿಷ್ಠಾನದ ಅಧ್ಯಕರಾದ ಪ್ರೊ.ಪಿವಿ ನಾರಾಯಣ ಅವರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯ ಚಟುವಟಿಕೆಗಳನ್ನು ವಿವರಿಸಿ ಪ್ರಶಸ್ತಿಯ ಪುರಸ್ಕೃತರನ್ನು ಆಯ್ಕೆ ಮಾಡುವ ಪಾರದರ್ಶಕ ವಿಧಾನವನ್ನು ವಿವರಿಸಿದರು.

ಈ ಪ್ರಶಸ್ತಿಯ ತೀರ್ಪುಗಾರರಾಗಿ ಪುರಸ್ಕೃತರನ್ನು ಆಯ್ಕೆ ಮಾಡಲು ಸೂಚಿಸಿದ ಪ್ರೊ.ರಾಮರಾವ್ ಕುಲಕರ್ಣಿಯವರು ತಾವು ಸ್ವತಹ ಮಾರುಕಟ್ಟೆಯಲ್ಲಿ ಹಲವಾರು ಮಹಿಳಾ ಲೇಖಕಿಯರ ಪುಸ್ತಕಗಳನ್ನು ಖರೀದಿಸಿ ಅಧ್ಯಯನ ಮಾಡಿ ನಂತರ ತಮ್ಮ ಜೊತೆಗಾರ ತೀರ್ಪುಗಾರರ ಜೊತೆ ಚರ್ಚೆ ಮಾಡಿದ್ದನ್ನು ನೆನಪಿಸಿಕೊಂಡು ಶ್ರೀಮತಿ ಸುನಂದ ಕಡಮೆ ಅವರ ಸಾಹಿತ್ಯದಲ್ಲಿ ಉತ್ತಮ ಅಂಶಗಳ ಉದಾಹರಣೆಗಳನ್ನು ತಿಳಿಸಿದರು.

ತಮ್ಮ ಪಾಡಿಗೆ ತಾವು ಸಾಹಿತ್ಯ ರಚಿಸುತ್ತಿರುವ, ನಿಜವಾದ ಬರಹದ ತುಡಿತವಿರುವ ಹೊಸಲೇಖಕೀಯರಿಗೆ ಪ್ರಶಸ್ತಿ ನೀಡಬೇಕೆಂಬುದು ತನ್ನ ಆಸೆಯಾಗಿದ್ದು ಆಯ್ಕೆ ಸಮಿತಿಯವರು ಒಮ್ಮತದಿಂದ ಶ್ರೀಮತಿ ಸುನಂದ ಅವರನ್ನು ಆಯ್ಕೆ ಮಾಡಿರುವುದು ತಮಗೆ ಸಂತಸ ತಂದಿದೆ ಹಾಗೂ ತನ್ನ ಹೆಸರಿನ ಪ್ರಶಸ್ತಿ ಅತ್ಯಂತ ಸೂಕ್ತ ವ್ಯಕ್ತಿಗೆ ಸಂದಿದೆ ಎಂದು ದತ್ತಿ ನಿಧಿ ಸ್ಥಾಪಕಿ ಡಾ. ವಿಜಯಾ ಸುಬ್ಬರಾಜ್ ರವರು ಹೇಳಿದರು.

ಗೌರವ ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ಎಲ್ಲರನ್ನೂ ಸ್ವಾಗತಿಸಿ ಕಾರ್ಯಕ್ರಮದ ನಿರೂಪಣೆ ಮಾಡಿದರು. ಗೌರವ ಕಾರ್ಯದರ್ಶಿ ರವೀಂದ್ರನಾಥ್ ವಂದನಾರ್ಪಣೆ ಮಾಡಿದರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

**ಸಾಕ್ಷ್ಯಚಿತ್ರ ಪ್ರದರ್ಶನ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹೊಸ ಕಾರ್ಯಕ್ರಮವಾದ ಈ ಕಾರ್ಯಕ್ರಮದಲ್ಲಿ ಮೊದಲನೇ ಕಾರ್ಯಕ್ರಮವನ್ನು 16ನೇ ಏಪ್ರಿಲ್ 2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಇತ್ತೀಚೆಗೆ ಅಳವಡಿಸಲಾಗಿರುವ ನೂತನ ಪ್ರೊಜೆಕ್ಟರ್ ಮೂಲಕ "ಕರ್ನಾಟಕದ ಭೌಗೋಳಿಕ ವಿಸ್ಮಯಗಳು" ವಿಡಿಯೋ ಚಿತ್ರದ ಎರಡು ಭಾಗಗಳನ್ನು ಪ್ರದರ್ಶಿಸಲಾಯಿತು.ಬಹು ಜನರಿಗೆ ಅಪರಿಚಿತವಾದ ಹಲವಾರು ಆಸಕ್ತಿದಾಯಕ ವಿಷಯಗಳನ್ನು ಒಳಗೊಂಡ ಈ ಸಾಕ್ಷ್ಯಚಿತ್ರ ಸಭಿಕರನ್ನು ಬೆರಗುಗೊಳಿಸಿತು.

**ಗಣ್ಯ ವ್ಯಕ್ತಿಗಳ ಭೇಟಿ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ನಾಡಿನ ಹಲವಾರು ಗಣ್ಯ ವ್ಯಕ್ತಿಗಳು ಆಸಕ್ತಿ ವಹಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ತಮ್ಮ ಬಿಡುವಿಲ್ಲದ ಕೆಲಸಗಳ ನಡುವೆಯೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳಲ್ಲಿ ಭಾಗವಹಿಸಲು ಹಲವು ಗಣ್ಯ ವ್ಯಕ್ತಿಗಳು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ಭೇಟಿ ನೀಡುವುದರಿಂದ ಪ್ರತಿಷ್ಠಾನದ ಪದಾಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರಿಗೆ ಪ್ರೋತ್ಸಾಹ ದೊರಕುತ್ತಿದೆ.



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹಿತೈಷಿಗಳೂ ಹಾಗೂ ಆಪ್ತರಾದ ಶತಾಯುಷಿ ಪ್ರೊ. ಜಿ.ವೆಂಕಟಸುಬ್ಬಯ್ಯರವರು ಕೆಪಿ ರಾವ್ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದು ಎಲ್ಲಾ ಸಭಿಕರಿಗೂ ಹಾಗೂ ಪ್ರತಿಷ್ಠಾನದ ಬಳಗದವರಿಗೂ ಸಂತಸವನ್ನು ನೀಡಿತು.

**ಡಾ, ಸುಧಾ ಮೂರ್ತಿಯವರಿಂದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ರೂ. ಹತ್ತು ಲಕ್ಷ ಮೊತ್ತದ ಕೊಡುಗೆ**

ದಿನಾಂಕ 17ನೇ ಏಪ್ರಿಲ್ 2015 ರಂದು ಸುಪ್ರಸಿದ್ಧ ಲೇಖಕಿ, ಕನ್ನಡ ಅಭಿಮಾನಿ ಡಾ, ಸುಧಾ ಮೂರ್ತಿಯವರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ಭೇಟಿ ನೀಡಿ ಇನ್ಫೊಸಿಸ್ ಫೌಂಡೇಶನ್ ವತಿಯಿಂದ ಪ್ರಕಟಿಸಲಾಗಿರುವ ವಿಶ್ವದ ಶ್ರೇಷ್ಠ ಕೃತಿಗಳ ಇಂಗ್ಲೀಷ್ ಅನುವಾದ ಕೃತಿಗಳು ಹಾಗೂ ಇತರ ಗ್ರಂಥಗಳನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ಕೊಡುಗೆ ನೀಡಿದರು.

ಕೊಡುಗೈ ದಾನಿಯಾದ ಅವರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಅಗತ್ಯಗಳನ್ನು ಪದಾಧಿಕಾರಿಗಳಿಂದ ಕೂಲಂಕಷವಾಗಿ ವಿಚಾರಿಸಿಕೊಂಡು ಪ್ರತಿಷ್ಠಾನದ ಶಾಶ್ವತ ನಿಧಿಗೆ ರೂ.ಹತ್ತು ಲಕ್ಷ ಮೊತ್ತವನ್ನು ದಾನವಾಗಿ ಕೊಡುವ ಜವಾಬ್ದಾರಿ ವಹಿಸಿಕೊಂಡು ಕೂಡಲೇ ಆ ಬಗ್ಗೆ ಕ್ರಮವನ್ನೂ ಕೈಗೊಂಡಿರುತ್ತಾರೆ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಡಾ.ಸುಧಾ ಮೂರ್ತಿಯವರಿಗೆ ಧನ್ಯವಾದಗಳನ್ನು ಅರ್ಪಿಸುತ್ತದೆ.

**ಪ್ರತಿ ತಿಂಗಳ ಸಿರಿಸಂಗೀತ ದಿನಾಂಕ 25ನೇ ಏಪ್ರಿಲ್ 2015**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರತಿ ತಿಂಗಳ ಸಿರಿಸಂಗೀತ ಕಾರ್ಯಕ್ರಮದಡಿಯಲ್ಲಿ ಶ್ರೀಮತಿ ಹಾ.ವಿ. ಮಂಜುಳಾ ಶಿವಾನಂದಾ ಮತ್ತು ಸಂಗಡಿಗರುಕನ್ನಡದ ಮಹಿಳಾ ಲೇಖಕೀಯರು ರಚಿಸಿದ ಗೀತೆಗಳ ಗಾಯನ ನಡೆಸಿಕೊಟ್ಟರು.ಸ್ವತಹ ಸುಮಾರು 15 ಪುಸ್ತಕಗಳನ್ನು ರಚಿಸಿರುವ ಲೇಖಕಿಯಾಗಿದ್ದು, ಕರ್ನಾಟಕ ಲೇಖಕೀಯರ ಸಂಘದ ಪದಾಧಿಕಾರಿಯಾಗಿದ್ದ ಶ್ರೀಮತಿ ಮಂಜುಳಾ ರವರು ಕೆಲವು ಸ್ವರಚಿತ ಗೀತೆಗಳನ್ನೂ ಸೇರಿಸಿ ಈ ಎಲ್ಲಾ ಗೀತೆಗಳಿಗೆ ಸ್ವರ ಸಂಯೋಜನೆ ಮಾಡಿ ಅವುಗಳನ್ನು ಹಾಡಿದ್ದು ಒಂದು ವಿಶಿಷ್ಟ ಅನುಭವವನ್ನೇ ತಂದುಕೊಟ್ಟಿತು.















## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ
## www.bmshri.org

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣವನ್ನು ಪುನರ್ ರೂಪಿಸಲಾಗಿರುತ್ತದೆ. ಕನ್ನಡ ಗಣಕ ಪರಿಷತ್ತು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣವನ್ನು ನವೀಕರಿಸುವ ಕೆಲಸವನ್ನು ಪ್ರಾರಂಭಿಸಿದ್ದು ಈಗಾಗಲೇ ಹಲವಾರು ನೂತನ ಸೌಲಭ್ಯಗಳನ್ನು ಅಳವಡಿಸಿರುತ್ತಾರೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ ವಿಶ್ವದಾದ್ಯಂತ ಕನ್ನಡ ಅಧ್ಯಯನ ಮಾಡುವ ಎಲ್ಲರಿಗೂ ಉತ್ತಮ ಸಂಪನ್ಮೂಲಗಳ ಕಣಜವಾಗಿರುವಂತೆ ಮಾಡಲು ವಿಶೇಷ ಶ್ರಮ ವಹಿಸಲಾಗುತ್ತಿದೆ. ಶೀಘ್ರದಲ್ಲಿ ಹಲವಾರು ನೂತನ ಶೈಲಿಯ ಸೌಲಭ್ಯಗಳನ್ನು ಈ ಜಾಲತಾಣದಲ್ಲಿ ಕಾಣಬಹುದು.

# ಶಾಶ್ವತ ನಿಧಿ

## ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ , ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದುಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ ಏಪ್ರಿಲ್ 2015 ರಲ್ಲಿ ರೂ. 5000/– ಅಥವಾ ಹೆಚ್ಚು ಕಾಣಿಕೆ ನೀಡಿರುವವರ ಪಟ್ಟಿ

**ಡಾ. ರಮಾಮಣಿ ರೂ. 25000/–**

**ಡಾ॥ ಸುಧಾಮೂರ್ತಿ ರೂ. 10,00,000/–**



**ದಿನಾಂಕ 17ನೇ ಏಪ್ರಿಲ್ 2015 ರಂದು ಸುಪ್ರಸಿದ್ದ ಲೇಖಕಿ, ಕನ್ನಡ ಅಭಿಮಾನಿ ಡಾ, ಸುಧಾ ಮೂರ್ತಿಯವರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ಭೇಟಿ ನೀಡಿದ್ದರು.**

# ಪ್ರತಿಷ್ಠಾನದ ಹೊಸ ನಿಯತ ಕಾರ್ಯಕ್ರಮ
# 'ಅಕ್ಕರ ಗೊಟ್ಟಿ'

**ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ**
**ಸ್ಥಳ : ಶಾ. ಬಾಲೂರಾವ್ ಮಾತಿನ ಮನೆ**
**ಎರಡನೆಯ ಮಹಡಿ, ಬಿಎಂಶ್ರೀ ಪ್ರತಿಷ್ಠಾನ**

**ಕಾರ್ಯಕ್ರಮದ ಸ್ವರೂಪ:**

1. ಇದು ಉಪನ್ಯಾಸ ಕಾರ್ಯಕ್ರಮವಲ್ಲ; ಪ್ರತಿಷ್ಠಾನವು ಯಾರನ್ನೂ ಅತಿಥಿಯಾಗಿ ಆಹ್ವಾನಿಸುವುದಿಲ್ಲ.
2. ಸಂಸ್ಕೃತಿಗೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ಒಬ್ಬರು ಆಸಕ್ತರು ತಾವಾಗಿ ಹತ್ತು–ಹದಿನೈದು ನಿಮಿಷಗಳಲ್ಲಿ ತಮ್ಮ ವಿಚಾರವನ್ನು ಮಂಡಿಸುತ್ತಾರೆ: ಅದರ ವಿಷಯವಾಗಿ ಒಂದು ಗಂಟೆಯವರೆಗೂ ಚರ್ಚೆ ಮುಂದುವರಿಯುತ್ತದೆ; ಚರ್ಚೆಯಲ್ಲಿ ಆಸಕ್ತರಾದ ಯಾರು ಬೇಕಾದರೂ ಭಾಗವಹಿಸಬಹುದು.
3. ಯಾರು ಬೇಕಾದರೂ ತಮಗೆ ಸೂಕ್ತವೆನಿಸಿದ ವಿಷಯವನ್ನು ಚರ್ಚೆಗೆ ಮಂಡಿಸಬಹುದು; ಆದರೆ ಕನಿಷ್ಠ ಒಂದು ತಿಂಗಳ ಮುಂಚೆ ವಿಷಯವನ್ನು ಪ್ರತಿಷ್ಠಾನದ ಕಾರ್ಯದರ್ಶಿಗಳಿಗೆ ತಿಳಿಸಬೇಕು. ಚರ್ಚೆಯಲ್ಲಿ ಪಾಲುಗೊಳ್ಳುವವರಿಗಾಗಿ ಪ್ರತಿಷ್ಠಾನದ ಸೂಚನಾ ಫಲಕದಲ್ಲಿ ಹಾಗೂ ಪ್ರತಿ ತಿಂಗಳ ಮೊದಲಲ್ಲಿ ಪ್ರಕಟವಾಗುವ ವಾರ್ತಾಪತ್ರ 'ಹೊಂಗನಸು'ವಿನಲ್ಲಿ ತಿಳಿಯಪಡಿಸಲಾಗುವುದು
4. ಚರ್ಚೆಗೆ ಆರಿಸಿಕೊಳ್ಳುವ ವಿಷಯ ಸಂಸ್ಕೃತಿಗೆ ಸಂಬಂಧಿಸಿದ ಯಾವುದೇ ಆಗಿರಬಹುದು: ಸಾಹಿತ್ಯ, ಶಾಸನ, ಕಲೆ, ಸಿನಿಮ, ಸಂಗೀತ, ಇತಿಹಾಸ, ಮಾನವಿಕ – ಹೀಗೆ. ಗೊಟ್ಟಿಯಲ್ಲಿ ನಡೆಯುವ ಚರ್ಚೆಯನ್ನು ಧ್ವನಿಮುದ್ರಿಸಿಕೊಂಡು ಯೂಟ್ಯೂಬ್ನಲ್ಲಿಯೂ ಹಾಕಲಾಗುವುದು.
5. ಪ್ರತಿ ತಿಂಗಳೂ ಎರಡನೆಯ ಶನಿವಾರ ಸಂಜೆ 6–00 ಗಂಟೆಗೆ ಕಾರ್ಯಕ್ರಮ ಆರಂಭ

**'ಅಕ್ಕರ ಗೊಟ್ಟಿ'ಯ ಮೊದಲ ಕಾರ್ಯಕ್ರಮ 09–05–2015 ರಂದು ಸಂಜೆ 6–00 ಗಂಟೆಗೆ**

ವಿಷಯ: "ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ" ಎಂದು ಆರಂಭವಾಗುವ ಕುಮಾರವ್ಯಾಸ ಭಾರತದ ಪದ್ಯ ಹಾಗೂ 'ಕರ್ನಾಟಕ ಕಾದಂಬರಿಯ'ಯ "ಎಲೆ ತಾರಾಗಂ ಹರಂ ಕಣ್ಣಿಡೆ ಕರಗಿದುದು" ಎಂದು ಆರಂಭವಾಗುವ ಪದ್ಯಗಳ ಹಿನ್ನೆಲೆಯಲ್ಲಿ ಅಭಿವ್ಯಕ್ತಿಯ ಸ್ವರೂಪ

ಮಂಡನೆ: ಪ್ರೊ. ಕೆ.ಎಸ್ ಮಧುಸೂದನ

**ಶಾ. ಬಾಲೂರಾವ್ ಮಾತಿನ ಮನೆ**

ಬಿಎಂಶ್ರೀ ಯವರ ಮೊಮ್ಮಗಳು ಶ್ರೀಮತಿ ಕಮಲಿನಿ ಶಾ ಬಾಲೂರಾವ್ ರವರು ನೀಡಿದ ದಾನದ ಮೊತ್ತದಿಂದ ಬಿಎಂಶ್ರೀ ಪ್ರತಿಷ್ಠಾನದ ಎರಡನೆಯ ಮಹಡಿಯಲ್ಲಿ "ಶಾ. ಬಾಲೂರಾವ್ ಮಾತಿನ ಮನೆ" ಯನ್ನು ಸ್ಥಾಪಿಸಲಾಗಿದೆ.

ಈ ಸಭಾಂಗಣದಲ್ಲಿ ಸಾಹಿತ್ಯಾಸಕ್ತರು ಔಪಚಾರಿಕ ಹಾಗೂ ಅನೌಪಚಾರಿಕ ಚರ್ಚೆಗಳನ್ನು ನಡೆಸಿ ಕನ್ನಡ ಸಾಹಿತ್ಯದಲ್ಲಿ ಹೊಸತನವನ್ನು ಕಾಣುವ ಹಾಗೂ ಹೊಸತನವನ್ನು ತರುವ ಪ್ರಯತ್ನಗಳನ್ನು ಮಾಡುವ ಕೆಲಸ ಆಗಬೇಕೆಂದು ಆಶಯವಿದೆ. ಬಿಎಂಶ್ರೀ ಪ್ರತಿಷ್ಠಾನವು ಈ ನಿಟ್ಟಿನಲ್ಲಿ ಹೆಜ್ಜೆಯನ್ನಿಟ್ಟು ಹೊಸ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುತ್ತದೆ. ಇದೇ ರೀತಿಯಲ್ಲಿ ಕನ್ನಡ ಪರ ಸಂಘ ಸಂಸ್ಥೆಗಳು ಹಾಗೂ ಸಾಹಿತ್ಯಾಸಕ್ತರು ಸಾಹಿತ್ಯ ಸಂಬಂಧಿತ ಚಟುವಟಿಕೆಗಳನ್ನು ನಡೆಸಲು ಈ ಸಭಾಂಗಣವನ್ನು ಬಹು ಸುಲಭ ದರಗಳಲ್ಲಿ ಪಡೆಯಬಹುದಾಗಿರುತ್ತದೆ. ಸುಮಾರು 50 ಜನರು ಕುಳಿತು ಚರ್ಚೆ ನಡೆಸಬಹುದಾಗಿರುತ್ತದೆ.ಇತರ ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿರಿ.

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳು ಈಗ ಯೂ ಟ್ಯೂಬ್ ನಲ್ಲಿ ಲಭ್ಯ

ಸದಸ್ಯರು ಹಾಗೂ ವಿಶ್ವದಾದ್ಯಂತ ಇರುವ ಪ್ರತಿಷ್ಠಾನದ ಅಭಿಮಾನಿಗಳ ಅನುಕೂಲಕ್ಕಾಗಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳ ಧ್ವನಿ ಮುದ್ರಿತ ಉಪನ್ಯಾಸಗಳು ಹಾಗೂ ವಿಡಿಯೋಗಳನ್ನು ಜನಪ್ರಿಯ ಯೂ ಟ್ಯೂಬ್ ನಲ್ಲಿ ಅಳವಡಿಸಲಾಗಿದೆ. ಇವುಗಳನ್ನು ತಲುಪಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ www.bmshri.org ಗೆ ಭೇಟಿ ನೀಡಿ.

**Regd. with RNI, New Delhi. KARKAN 24541 dated 08.12.2014**

# ಗ್ರಂಥಾಲಯದ ಒಂದು ನೋಟ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಇಂದಿನವರೆಗೆ ಶೇಖರಣೆಯಾದ ಗ್ರಂಥಗಳ ಸಂಖ್ಯೆ 25692 ಹಾಗೂ ನಿಯತಕಾಲಿಕಗಳ ಸಂಖ್ಯೆ 7047. ಈ ಅಮೂಲ್ಯವಾದ ಗ್ರಂಥರಾಶಿಯನ್ನು ವೈಜ್ಞಾನಿಕವಾಗಿ ಸಂಘಟಿಸಿ ಎಲ್ಲ ಪುಸ್ತಕಗಳ ಗಣಕೀಕೃತ ಸೂಚಿಯನ್ನು ತಯಾರಿಸಲಾಗಿದೆ. ಪ್ರತಿಷ್ಠಾನದ ಗ್ರಂಥಾಲಯವು ಎಲ್ಲ ರೀತಿಯಿಂದ ಸುಸಜ್ಜಿತಗೊಂಡಿರುವದರಿಂದ ವಿದ್ವಾಂಸರು, ವಿದ್ಯಾರ್ಥಿಗಳು ಹಾಗೂ ಪ್ರತಿಷ್ಠಾನದ ಎಲ್ಲ ಸದಸ್ಯರು ಇದರ ಸದುಪಯೋಗ ಪಡೆದುಕೋಳ್ಳಬಹುದಾಗಿದೆ.

ಈ ಕೆಳಗೆ ನಮೂದಿಸಿದ ವಿಶೇಷ ಸಂಗ್ರಹ ಲಭ್ಯವಿದೆ

1. ಕನ್ನಡ ಭಾಷೆ,ಕನ್ನಡ ವ್ಯಾಕರಣ ,ಕನ್ನಡ ಪ್ರಾಚೀನ ಹಾಗೂ ಆಧುನಿಕ ಸಾಹಿತ್ಯ
2 ಕನ್ನಡ ವಿದ್ವಾಂಸರಾದ ರೈಸ, ಬಿಎಂಶ್ರೀ.ತೀನಂಶ್ರಿ,ಬೇಂದ್ರೆ. ಡಿವಿಜಿ, ಶಂಬಾ, ಕುವೆಂಪು, ಪುತಿನ, ಶಿವರಾಮ ಕಾರಂತ, ಎಂವಿಸೀ, ವಿ.ಸೀ. ಮುಂತಾದವರ ವಿಶೇಷ ಸಂಗ್ರಹ
3. ಕನ್ನಡ ಭಾಷೆ, ಸಂಸ್ಕೃತಿ ಹಾಗು ಕನ್ನಡ ನಾಡಿನ ಹಿರಿಮೆಯನ್ನು ಎತ್ತಿಹಿಡಿಯುವದಕ್ಕಾಗಿ ಮೀಸಲಾದ ಸುಮಾರು 100 ಪುಸ್ತಕಗಳು ಲಭ್ಯವಿವೆ.
4. ರೈಸ್ ಎಪಿಗ್ರಾಫಿಯಾ ಕರ್ಣಾಟಿಕಾ ಸಂಪುಟಗಳು ಹಾಗು ಮೈಸೂರು ವಿಶ್ವವಿದ್ಯಾನಿಲಯದ ಸಂಪುಟಗಳು.

# ಪ್ರತಿಷ್ಠಾನದ ಕಚೇರಿಯ ಕೆಲಸದ ವೇಳೆ ಬದಲಾವಣೆ

ಪ್ರತಿಷ್ಠಾನದ ಕೆಲಸಗಳನ್ನು ಹೆಚ್ಚು ದಕ್ಷತೆಯಿಂದ ಸಾಧಿಸಲು ಹಾಗೂ ಸದಸ್ಯರು ಮತ್ತು ಸಾಹಿತ್ಯಾಸಕ್ತರ ಹೆಚ್ಚಿನ ಅನುಕೂಲಕ್ಕಾಗಿ ದಿನಾಂಕ

1 ನೇ ಏಪ್ರಿಲ್ 2015 ರಿಂದ ಪ್ರತಿಷ್ಠಾನದ ಕಚೇರಿಯ ಕೆಲಸದ ವೇಳೆ ಹೀಗಿರುತ್ತದೆ:

ಸೋಮವಾರದಿಂದ ಶನಿವಾರದವರೆಗೆ ಮಧ್ಯಾಹ್ನ 12.30ರಿಂದ ಸಂಜೆ 7.30 ವರೆಗೆ

ವಾರದ ರಜಾದಿನ : ಭಾನುವಾರ

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ**

ತೆರೆದ–ಅಂಚೆ

*ಶ್ರೀಮತಿ/ಶ್ರೀ*..................................................................................

..........................................................................................

..........................................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭